# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 2305
**ಮಾನ್ಯ ಸದಸ್ಯರ ಹೆಸರು** : ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು )
**ಉತ್ತರಿಸಬೇಕಾದ ದಿನಾಂಕ** : 21-03-2022
**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ, ಜೀವಿಶಾಸ್ತ್ರ, ಮತ್ತು ಪರಿಸರ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿರುವ ವಿಶ್ವ ಪ್ರಸಿದ್ಧ ಸುರಂಗ ಬಾವಿ (ಕರೇಜ್) ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಎಷ್ಟು ಕಿಲೋಮೀಟರ್ ಇದೆ; | ಬಂದಿದೆ.<br>ಬೀದರ್ ಜಿಲ್ಲೆಯಲ್ಲಿರುವ ಸುರಂಗ ಬಾವಿಯು ಸುಮಾರು 3 ಕಿ.ಮೀ. ವರೆಗೆ ಇರುತ್ತದೆ. |
| ಆ) | ಈ ಸುರಂಗ ಬಾವಿಯ ಪುನಶ್ಚೇತನ (ದುರಸ್ತಿ) ಕ್ಕಾಗಿ 2016 ಮತ್ತು 2021ನೇ ಸಾಲಿನಲ್ಲಿ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ; ಅದರಲ್ಲಿ ಖರ್ಚಾಗಿರುವ ಮೊತ್ತವೆಷ್ಟು; (ವಿವರ ನೀಡುವುದು) | ಬೀದರ್ ನಗರದ ವ್ಯಾಪ್ತಿಯಲ್ಲಿ ಬರುವ ಶಿಕಾರಗ ಮತ್ತು ಕರೇಜ್ ಪುನರುತ್ಥಾನ, ಕರೇಜ್‌ದಲ್ಲಿ ಹೂಳು ತೆಗೆಯುವುದು, ಸುತ್ತುಗೋಡೆ, ನೀರು ಶುದ್ಧೀಕರಣ ಕಿಂಡಿಗಳ ಸಂರಕ್ಷಣೆ, ಪ್ರವಾಸಿಗರಿಗೆ ಮೂಲಭೂತ ಸೌಕರ್ಯ ಹಾಗೂ ಉದ್ಯಾನವನ ಕಾಮಗಾರಿಯನ್ನು ರೂ.270.00ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರದ ಆದೇಶ ಸಂಖ್ಯೆ : ಪ್ರಇ 176 ಪ್ರವಾಯೋ 2017, ದಿನಾಂಕ: 29.05.2017 ರಲ್ಲಿ ಪರಿಷ್ಕೃತ ಅನುಮೋದನೆ ನೀಡಲಾಗಿದೆ. ಅದರಂತೆ, ಈ ಕಾಮಗಾರಿಯನ್ನು ಅನುಷ್ಠಾನಗೊಳಿಸಲು ಮೊದಲ ಕಂತಾಗಿ ರೂ.50.00ಲಕ್ಷಗಳನ್ನು ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ, ಬೀದರ್ ಜಿಲ್ಲೆ, ಇವರಿಗೆ ಬಿಡುಗಡೆ ಮಾಡಲಾಗಿರುತ್ತದೆ.<br>ಈ ಕಾಮಗಾರಿಗೆ ಲೋಕೋಪಯೋಗಿ ಇಲಾಖೆ, ಬೀದರ್ ರವರಿಂದ ಎರಡು ಬಾರಿ ಟೆಂಡರ್ ಕರೆಯಲಾಗಿದ್ದು, ಈ ಎರಡು ಟೆಂಡರ್ ಗಳಲ್ಲಿ ಅರ್ಹ ಗುತ್ತಿಗೆದಾರರು ಆಯ್ಕೆಯಾಗಿರುವುದಿಲ್ಲ.<br>ಸದರಿ ಕಾಮಗಾರಿಯನ್ನು ಪ್ರಾರಂಭಿಸದೇ ಇರುವುದರಿಂದ 2019-20ನೇ ಸಾಲಿನಲ್ಲಿ ಸರ್ಕಾರದ ಆದೇಶ ದಿನಾಂಕ: 20.07.2019ರಲ್ಲಿ ಸರ್ಕಾರವು ರದ್ದುಪಡಿಸಿ ಆದೇಶಿಸಿದೆ. ಆದ್ದರಿಂದ, ಈ ಕಾಮಗಾರಿಗೆ ಬಿಡುಗಡೆ ಮಾಡಿರುವ ಮೊತ್ತ ರೂ.50.00ಲಕ್ಷಗಳು ವೆಚ್ಚವಾಗಿರುವುದಿಲ್ಲ ಹಾಗೂ ಸದರಿ ಅನುದಾನವನ್ನು ಪ್ರಗತಿಯಲ್ಲಿರುವ ಬೇರ ಕಾಮಗಾರಿಗೆ ಬಳಸಿಕೊಳ್ಳಲು ಕ್ರಮ ವಹಿಸಲಾಗಿದೆ. |
| ಇ) | ಸ್ಥಗಿತಗೊಂಡ ಈ ಸುರಂಗ ಬಾವಿಯ ಪುನಶ್ಚೇತನದ ಕಾಮಗಾರಿಗೆ ಮರು ಚಾಲನೆ ಮಾಡುವ ಯೋಜನೆ ಏನಾದರೂ ಸರ್ಕಾರದ ಮುಂದಿದೆಯೇ; | ಬೀದರ್ ನಗರದ ವ್ಯಾಪ್ತಿಯಲ್ಲಿ ಬರುವ ಶಿಕಾರಗ ಮತ್ತು ಕರೇಜ್ ಪುನರುತ್ಥಾನ, ಕರೇಜ್‌ನಲ್ಲಿ ಹೂಳು ತೆಗೆಯುವುದು, ಸುತ್ತುಗೋಡೆ, ನೀರು ಶುದ್ಧೀಕರಣ, ಕಿಂಡಿಗಳ ಸಂರಕ್ಷಣೆ, ಪ್ರವಾಸಿಗರಿಗೆ ಮೂಲಭೂತ ಸೌಕರ್ಯ ಹಾಗೂ ಉದ್ಯಾನವನ ಹಾಗೂ ಶಿಕಾರಗದಲ್ಲಿ ಸುತ್ತುಗೋಡೆ ನಿರ್ಮಾಣ ಕಾಮಗಾರಿಯನ್ನು ರೂ.50.00ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ನಿರ್ಮಿತಿ ಕೇಂದ್ರದಿಂದ ಸಿದ್ಧಪಡಿಸಿರುವ ಅಂದಾಜು ಪಟ್ಟಿಯನ್ನು ಲಗತ್ತಿಸಿ, ಕಾಮಗಾರಿಯನ್ನು ಪ್ರಾರಂಭಿಸಲು ಅನುಮೋದನೆ ನೀಡುವಂತೆ ಕೋರಿ ಸಹಾಯಕ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಬೀದರ್ ಜಿಲ್ಲೆ ಇವರು ದಿನಾಂಕ :06.04.2021ರಲ್ಲಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರದ ಪತ್ರ ದಿನಾಂಕ : 13.09.2021ರಲ್ಲಿ ಕೆಲವು ಮಾಹಿತಿಯನ್ನು ಒದಗಿಸುವಂತೆ ಕೋರಲಾಗಿರುತ್ತದೆ. ಈ ಬಗ್ಗೆ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು, ಇವರಿಂದ ಸರ್ಕಾರಕ್ಕೆ ಪರಿಷ್ಕೃತ ಪ್ರಸ್ತಾವನೆ ಸ್ವೀಕೃತವಾದ ನಂತರ ಪರಿಶೀಲಿಸಿ ಕ್ರಮವಹಿಸಲಾಗುವುದು. |
| ಈ) | ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಚಾಲನೆ ನೀಡಲಾಗುವುದು; ಇಲ್ಲವಾದಲ್ಲಿ ಇದಕ್ಕೆ ಕಾರಣವೇನು? | |

**TOR 140 TDV 2022**

(ಆನಂದ್ ಸಿಂಗ್)
ಪ್ರವಾಸೋದ್ಯಮ,
ಜೀವಿಶಾಸ್ತ್ರ, ಮತ್ತು ಪರಿಸರ ಸಚಿವರು